<u>ಕರ್ನಾಟಕ ವಿಧಾನ ಪರಿಷತ್ತು</u>

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 111 (131)

2) ಸದಸ್ಯರ ಹೆಸರು : ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು)

3) ಉತ್ತರಿಸುವ ದಿನಾಂಕ : 21-09-2020

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಕಾಡಾನೆ ಮತ್ತು ಮಾನವ ಸಂಘರ್ಷ ನಿರಂತರವಾಗಿ ನಡೆಯುತ್ತಿದ್ದು, ಸದರಿ ಸಂಘರ್ಷಕ್ಕೆ ಸರ್ಕಾರ ಗುರುತಿಸಿರುವ ಪ್ರಮುಖ ಹಾಗೂ ವೈಜ್ಞಾನಿಕ ಕಾರಣಗಳೇನು; | ಕಾಡಾನೆ ಮತ್ತು ಮಾನವ ಸಂಘರ್ಷಕ್ಕೆ ಕಾರಣಗಳು ಈ ಕೆಳಕಂಡಂತಿರುತ್ತವೆ.<br>1. ಆನೆ ವಲಯ ಪ್ರದೇಶಗಳಲ್ಲಿ ಈ ಕೆಳಕಂಡ ಕಾರಣಗಳಿಂದಾಗಿ ಅಡಚಣೆಯಾಗುತ್ತದೆ:<br>• ಅತಿಯಾದ ವಾಹನ ಸಂಚಾರ ದಟ್ಟಣೆ ಹಾಗೂ ರಸ್ತೆಯಲ್ಲಿನ ಚಲನವಲನಗಳು.<br>• ಹೆಚ್ಚಿನ ಸಂಖ್ಯೆಯಲ್ಲಿ ತಲೆಯೆತ್ತುತ್ತಿರುವ ಪ್ರವಾಸಿ ಚಟುವಟಿಕೆಗಳು.<br>2. ಆನೆ ವಲಯ ಪ್ರದೇಶಗಳಲ್ಲಿನ ಭೂಪ್ರದೇಶದ ಬಳಕೆಯಲ್ಲಿನ ಬದಲಾವಣೆಗಳು. |
| ಆ) | ಸದರಿ ಕಾರಣಗಳನ್ನು ಗುರುತಿಸಿದ ನಂತರದಲ್ಲಿ, ಸರ್ಕಾರ ಈ ಸಮಸ್ಯೆಯನ್ನು ಪರಿಹರಿಸಲು ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | ಮಾನವ-ವನ್ಯಜೀವಿ ಸಂಘರ್ಷ ನಿಯಂತ್ರಣಕ್ಕಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br>1. 51.37 ಕಿ.ಮೀ. ಸೋಲಾರ್ ತಂತಿಬೇಲಿ ನಿರ್ಮಾಣ ಮಾಡಲಾಗಿದೆ.<br>2. ಅರಣ್ಯ ಅಂಚಿನ ಗ್ರಾಮಗಳಲ್ಲಿ ಆನೆಗಳು ಕಾಡಿನಿಂದ ನಾಡಿಗೆ ಬಾರದಂತೆ 45.41 ಕಿ.ಮೀ. ಆನೆ ತಡೆಕಂದಕ ನಿರ್ಮಾಣ ಕಾಮಗಾರಿ ಕೈಗೊಳ್ಳಲಾಗಿದೆ.<br>3. ಅರಣ್ಯದಂಚಿನ ಗ್ರಾಮಗಳಲ್ಲಿ ರೈತರಿಗೆ ಶೇಕಡ 50:50ರ ರಿಯಾಯಿತಿಯನ್ನು, ಸೋಲಾರ್ ತಂತಿಬೇಲಿ ನಿರ್ಮಾಣವನ್ನು ಕೈಗೊಳ್ಳಲು ಅರಣ್ಯ ಇಲಾಖೆಯಿಂದ ಶೇಕಡ 50 ರಷ್ಟು ಸಹಾಯಧನ ನೀಡಲಾಗುತ್ತಿದ್ದು, 2020-21ನೇ ಸಾಲಿನಲ್ಲಿ 4.783 ಕಿ.ಮೀ. ಕಾಮಗಾರಿ ಪ್ರಗತಿಯಲ್ಲಿದೆ.<br>4. ಕಾಡಾನೆ ಹಾವಳಿಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು 13.42 ಕಿ.ಮೀ. ರೈಲ್ವೆ ಹಳಿಗಳ ಬ್ಯಾರಿಕೇಡ್ ನಿರ್ಮಾಣ ಮಾಡಲು ಉದ್ದೇಶಿಸಿದ್ದು, ಪ್ರಸ್ತುತ 9.516 ಕಿ.ಮೀ. ಕಾಮಗಾರಿ ಪೂರ್ಣಗೊಂಡಿದ್ದು, ಉಳಿದ ರೈಲ್ವೆ ಬ್ಯಾರಿಕೇಡ್ ಕಾಮಗಾರಿ ಪ್ರಗತಿಯಲ್ಲಿದೆ. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| | | 5. ಕೊಡಗು ಜಿಲ್ಲೆಯ ಅರಣ್ಯ ವೃತ್ತದ ವ್ಯಾಪ್ತಿಯ ವಲಯಗಳಲ್ಲಿ ಕಾಡಾನೆ ಹಾವಳಿಯ ತುರ್ತು ನಿರ್ವಹಣೆಗಾಗಿ 22 ರ್‍ಯಾಪಿಡ್ ರೆಸ್ಪಾನ್ಸ್ ತಂಡ (RRT) ರಚಿಸಿ ಕಾರ್ಯ ನಿರ್ವಹಿಸಲಾಗುತ್ತಿದೆ.<br>6. ಆಯ್ದ ವಲಯಗಳಲ್ಲಿ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳ ರಚನೆ ಮಾಡಲಾಗಿದೆ.<br>7. ಕಾಡಾನೆ ಇರುವಿಕೆ, ಅವುಗಳ ಚಲನವಲನಗಳ ಬಗ್ಗೆ ಸಾರ್ವಜನಿಕರಿಗೆ ರೈತರಿಗೆ ಮಾಹಿತಿ ನೀಡುವ SMS Alert System ಕಾರ್ಯ ನಿರ್ವಹಿಸುತ್ತಿದೆ.<br>8. ವನ್ಯಪ್ರಾಣಿಗಳ ದಾಳಿಯಿಂದ ಭಾದಿತ ಗ್ರಾಮಗಳ ಜನರೊಂದಿಗೆ ಸಂಪರ್ಕ ಸಭೆಯನ್ನು ನಡೆಸಲಾಗುತ್ತಿದೆ.<br>9. ಕೊಡಗು ಜಿಲ್ಲೆಯಲ್ಲಿ 2014 ರಿಂದ ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ 13 ಕಾಡಾನೆಗಳನ್ನು ಸೆರೆಹಿಡಿದು ಸ್ಥಳಾಂತರ ಮಾಡಲಾಗಿರುತ್ತದೆ.<br>10. ಕೊಡಗು ಜಿಲ್ಲೆಯಲ್ಲಿ 9 ಆನೆಗಳಿಗೆ ರೇಡಿಯೋ ಕಾಲರ್‌ಗಳನ್ನು ಅಳವಡಿಸಿ, ಅವುಗಳ ಚಲನವಲನಗಳ ಬಗ್ಗೆ ನಿಗಾ ವಹಿಸಲಾಗುತ್ತಿದೆ.<br>11. ಕೊಡಗು ಜಿಲ್ಲೆಯ ನಾಗರಹೊಳೆ ವ್ಯಾಪ್ತಿಯಲ್ಲಿ ರಕ್ಷಣಾ ಕೆಲಸಗಳಿಗಾಗಿ ಎಸ್.ಟಿ.ಪಿ.ಎಫ್. ತಂಡ ನೇಮಕ ಮಾಡಿ, ರಕ್ಷಣಾ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ.<br>12. ಸರ್ಕಾರದ ಆದೇಶ ಸಂಖ್ಯೆ: ಎಫ್‌ಇಇ 31 ಎಫ್‌ಪಿಸಿ 2016, ದಿನಾಂಕ:07.08.2017 ರನ್ವಯ ಕೊಡಗು ಜಿಲ್ಲೆಯಲ್ಲಿ ಮಾನವ-ವನ್ಯಜೀವಿ ಸಂಘರ್ಷದಿಂದ ಭಾದಿತರಾದ ವ್ಯಕ್ತಿಗಳಿಗೆ ಸಾಮಾಜಿಕ ಮತ್ತು ಆರ್ಥಿಕ ಬೆಂಬಲ ನೀಡುವುದರ ಸೌಕರ್ಯಗಳನ್ನು ಒದಗಿಸುವ ಉದ್ದೇಶದಿಂದ "ಕೊಡಗು ಮಾನವ ವನ್ಯಪ್ರಾಣಿ ಸಂಘರ್ಷ-ಉಪಶಮನ ಪ್ರತಿಷ್ಠಾನ" ವನ್ನು ವೃತ್ತ ಮಟ್ಟದಲ್ಲಿ ಸ್ಥಾಪಿಸಲಾಗಿದೆ. |
| ಇ) | ಸದರಿ ಕ್ರಮಗಳನ್ನು ಅನುಷ್ಠಾನಗೊಳಿಸಿದ ನಂತರ ಪ್ರಕರಣಗಳ ಸಂಖ್ಯೆ ಇಳಿಮುಖವಾಗಿದೆಯೆ?<br>(ಜಿಲ್ಲೆಗೆ ಸಂಬಂಧಿಸಿದ ಕಳೆದ 5 ವರ್ಷಗಳ ಅಂಕಿ-ಅಂಶಗಳ ವಿವರವನ್ನು ನೀಡುವುದು) | ಕೊಡಗು ಜಿಲ್ಲೆಯಲ್ಲಿ ಮಾನವ-ವನ್ಯಜೀವಿ ಸಂಘರ್ಷದಲ್ಲಿ ಕಳೆದ 5 ವರ್ಷದಲ್ಲಿ ದಾಖಲಾದ ಪ್ರಕರಣಗಳ ವಿವರ ಈ ಕೆಳಕಂಡಂತಿದೆ. |

| ವರ್ಷ | ಪ್ರಕರಣ |
|---|---|
| 2016-17 | 2831 |
| 2017-18 | 1742 |
| 2018-19 | 3915 |
| 2019-20 | 3703 |
| 2020-21(ಆಗಸ್ಟ್-2020ರ ಅಂತ್ಯಕ್ಕೆ) | 1174 |

ಸಂಖ್ಯೆ: ಅಪಜೀ 145 ಎಫ್‌ಡಬ್ಲ್ಯೂಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು